## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1053** |
| ಉತ್ತರಿಸಬೇಕಾದ ದಿನಾಂಕ | : | 22.12.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮೀಣ ಪ್ರದೇಶಗಳಲ್ಲಿ ನೀಡುವ ವಸತಿ ಯೋಜನೆಗಳು ಯಾವುವು | ಸರ್ಕಾರವು ಗ್ರಾಮೀಣ ಪ್ರದೇಶದಲ್ಲಿ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದ ಮೂಲಕ ಈ ಕೆಳಕಂಡ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ:-<br><br>**ರಾಜ್ಯ ಸರ್ಕಾರದ ಯೋಜನೆಗಳು:**<br>• ಬಸವ ವಸತಿ ಯೋಜನೆ<br>• ಡಾ.ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ)<br>• ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ)<br><br>**ಕೇಂದ್ರ ಪುರಸ್ಕೃತ ಯೋಜನೆಗಳು:**<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ).<br>ನಿವೇಶನ ಯೋಜನೆಗಳು:<br>• ಮುಖ್ಯ ಮಂತ್ರಿಗಳ ಗ್ರಾಮೀಣ ನಿವೇಶನ ಯೋಜನೆ. |
| (ಆ) | ಈ ವಸತಿ ಯೋಜನೆಗಳಲ್ಲಿ ಹಂತವಾರು, ಕಾಮಗಾರಿ ಪೂರ್ಣಗೊಂಡು GPS ಪ್ರಗತಿ ಯಾಗಿದ್ದರೂ, ಫಲಾನುಭವಿಗಳಿಗೆ ಅನುದಾನ ಬಿಡುಗಡೆಯಾಗುವಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ಮತ್ತು ವಿಜಿಲ್ ಆ್ಯಪ್ ಮುಖಾಂತರ ಜಿ.ಪಿ.ಎಸ್. ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು. ಪ್ರಸ್ತುತ ಫಲಾನುಭವಿಗಳಿಗೆ ಅನುಕೂಲವಾಗಲೆಂದು ಇಂದಿರಾ ಆ್ಯಪ್ ಮತ್ತು ವಿಜಿಲ್ ಆ್ಯಪ್ ಅನ್ನು ಒಗ್ಗೂಡಿಸಿ ಇಂದಿರಾ ವಿಜಿಲ್ ಆಪ್ ಎಂಬ ಸರಳೀಕೃತ ತಂತ್ರಾಂಶವನ್ನು ಅಳವಡಿಸಿದ್ದು, ಸದರಿ ಆಪ್ ಮೂಲಕ ಜಿ.ಪಿಎಸ್. ಆಧಾರಿತ ಪ್ರಗತಿ ದಾಖಲಿಸಿದ ಪ್ರತಿಯೊಬ್ಬ ಫಲಾನುಭವಿಯ ಖಾತೆಗೆ ವಿಳಂಬವಿಲ್ಲದಂತೆ ಸಹಾಯ ಧನ ಜಮೆ ಆಗುತ್ತಿದೆ. |
| (ಇ) | ಬಂದಿದ್ದಲ್ಲಿ, ತ್ವರಿತಗತಿಯಲ್ಲಿ ಅನುದಾನವನ್ನು ಫಲಾನುಭವಿಗಳಿಗೆ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಈ)</td><td>ಕಳೆದ 2 ವರ್ಷಗಳಿಂದ ಗ್ರಾಮೀಣ ಭಾಗದಲ್ಲಿ ಎಷ್ಟು ವಸತಿಗಳನ್ನು ನೀಡಲಾಗಿದೆ; (ವಿವರ ನೀಡುವುದು) ಇಲ್ಲವಾದಲ್ಲಿ ಯಾವಾಗ ಮಂಜೂರಾತಿ ನೀಡಲಾಗುವುದು? (ವಿವರ ನೀಡುವುದು)</td><td>2019-20 ಹಾಗೂ 2020-21 ರಲ್ಲಿನ 2 ವರ್ಷಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ 61356 ಮನೆಗಳನ್ನು ಮಂಜೂರು ಮಾಡಲಾಗಿದೆ. ವಿವರ ಕೆಳಕಂಡಂತಿದೆ:-
<table>
<tr><th>ಯೋಜನೆ</th><th>ಶ್ರೇಣಿ</th><th>ಮಂಜೂರಾದ ಮನೆಗಳು</th></tr>
<tr><td rowspan="2">ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ)</td><td>2019-20</td><td>492</td></tr>
<tr><td>2020-21</td><td>20179</td></tr>
<tr><td>ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ)</td><td>2019-20</td><td>40685</td></tr>
<tr><td colspan="2">ಒಟ್ಟು</td><td>61356</td></tr>
</table>
2021-22ನೇ ಸಾಲಿಗೆ ವಿವಿಧ ವಸತಿ ಯೋಜನೆಗಳಡಿ ಗ್ರಾಮೀಣ ಪ್ರದೇಶಕ್ಕೆ 4 ಲಕ್ಷ ಮನೆಗಳ ಗುರಿ ನಿಗದಿಪಡಿಸಲಾಗಿದ್ದು, ಸದರಿ ಗುರಿಗೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶದ ಗ್ರಾಮ ಪಂಚಾಯತ್ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಅರ್ಹ ಫಲಾನುಭವಿಗಳ ಆಯ್ಕೆಗೆ ಸೂಚನೆ ನೀಡಲಾಗಿದ್ದು, ಈ ಸಂಬಂಧ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.</td></tr>
</table>

(ಸಂಖ್ಯೆ :ವಇ 478 ಹೆಚ್‌ಎಎಂ 2021)

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು